# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1633

ಸದಸ್ಯರ ಹೆಸರು : ಶ್ರೀ ಎಸ್.ವ್ಹಿ.ಸಂಕನೂರ (ಪದವೀಧರರ ಕ್ಷೇತ್ರ)

ಉತ್ತರಿಸ ಬೇಕಾದ ದಿನಾಂಕ : 18.03.2021

ಉತ್ತರಿಸ ಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಸರ್ಕಾರಿ ನೌಕರರಿಗೆ 5 ರಿಂದ 8 ಸ್ಥಗಿತ ವೇತನ ಬಡ್ತಿಯನ್ನು ನೀಡಲು ಆರ್ಥಿಕ ಇಲಾಖೆ ಯಾವ ದಿನಾಂಕದಿಂದ ಒಪ್ಪಿಗೆ ನೀಡಿದೆ; (ಮಾಹಿತಿ ನೀಡುವುದು) | 2011ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸಿನಂತೆ, ದಿನಾಂಕ: 01-04-2012ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಲಭ್ಯವಿದ್ದ ಸ್ಥಗಿತ ವೇತನ ಬಡ್ತಿಗಳ ಸಂಖ್ಯೆಯನ್ನು 5 ರಿಂದ 8ಕ್ಕೆ ಪರಿಷ್ಕರಿಸಿ ದಿನಾಂಕ: 14-06-2012ರ ಸರ್ಕಾರಿ ಆದೇಶ ಸಂಖ್ಯೆ: ಆಇ 12 ಎಸ್‌ಆರ್‌ಪಿ 2012 (VII) ಆದೇಶಗಳನ್ನು ಹೊರಡಿಸಲಾಗಿರುತ್ತದೆ. |
| (ಆ) | ರಾಜ್ಯದ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳಿಗೆ ಈ ಸೌಲಭ್ಯವನ್ನು ನೀಡಲು ಆರ್ಥಿಕ ಇಲಾಖೆ ಯಾವ ದಿನಾಂಕದಿಂದ ಒಪ್ಪಿಗೆ ಸೂಚಿಸಿದೆ; | ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರ ವೇತನ, ಭತ್ಯೆ ಮತ್ತು ಸೇವಾ ಸೌಲಭ್ಯಗಳನ್ನು, ಕರ್ನಾಟಕ ಶಿಕ್ಷಣ ಅಧಿನಿಯಮ, 1983ರ ನಿಯಮಗಳು ಮತ್ತು ಸದರಿ ಅಧಿನಿಯಮದಡಿ ಹೊರಡಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಂಸ್ಥೆಗಳ ನೌಕರರ ನೇಮಕಾತಿ ಮತ್ತು ನಿಬಂಧನೆಗಳು ಮತ್ತು ಸೇವಾ ಷರತ್ತುಗಳು) ನಿಯಮಗಳು, 1999 ರ ನಿಯಮಗಳಲ್ಲಿನ ಅವಕಾಶಗಳ ಪ್ರಕಾರ ಮತ್ತು ಸೌಲಭ್ಯಗಳ ಪರಿಷ್ಕರಣೆಯಿಂದ ಸರ್ಕಾರಕ್ಕೆ ಉಂಟಾಗುವ ಅಧಿಕ ಆರ್ಥಿಕ ಹೊರೆಯನ್ನು ಗಮನದಲ್ಲಿರಿಸಿ ಕಾಲದಿಂದ ಕಾಲಕ್ಕೆ ಪರಿಷ್ಕರಿಸಲಾಗುತ್ತಿದೆ. ಅದರಂತೆ, ಈ ಸೌಲಭ್ಯಗಳನ್ನು ಪರಿಷ್ಕರಿಸುವುದರಿಂದ ಉಂಟಾಗುವ ಅಧಿಕ ಆರ್ಥಿಕ ಹೊರೆಯನ್ನು ಗಮನದಲ್ಲಿರಿಸಿ, ಶಿಕ್ಷಣ ಇಲಾಖೆಯು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸ್ಥಗಿತ ವೇತನ ಬಡ್ತಿಗಳ ಸಂಖ್ಯೆಯನ್ನು 5 ರಿಂದ 8ಕ್ಕೆ ಪರಿಷ್ಕರಿಸಲು ಆರ್ಥಿಕ ಇಲಾಖೆಯು ಅನುಮೋದನೆ ನೀಡಿರುತ್ತದೆ.<br>ಅದರಂತೆ, ದಿನಾಂಕ: 06-07-2016ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 19 ಪಿಎಂಸಿ 2013ರಲ್ಲಿ, ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಲಭ್ಯವಿದ್ದ ಸ್ಥಗಿತ ವೇತನ ಬಡ್ತಿಗಳ ಸಂಖ್ಯೆಯನ್ನು 5 ರಿಂದ 8ಕ್ಕೆ ಪರಿಷ್ಕರಿಸಿ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ವಿಸ್ತರಿಸಲಾಗಿದೆ. |
| (ಇ) | 2012 ಹಾಗೂ 2016ರ ಮಧ್ಯದ ಅವಧಿಯಲ್ಲಿ ಸೇವೆಯಿಂದ ನಿವೃತ್ತರಾದ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಸೌಲಭ್ಯದಿಂದ ವಂಚಿತರಾಗಿರುವುದು ನಿಜವೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು? (ವಿವರ ನೀಡುವುದು) | |

**ಸಂ: ಆಇ 10 ಎಸ್‌ಆರ್‌ಪಿ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ